# ಶಿಲ್ಪಸಿದ್ಧಾಂತಿ
# ಶ್ರೀ ಸಿದ್ಧಲಿಂಗ ಸ್ವಾಮಿಗಳು

ಚಿತ್ರ - ಶಿಲ್ಪ ಸಂಪುಟ - ೨






ಕರ್ನಾಟಕ ಶಿಲ್ಪಕಲಾ ಅಕಾಡೆಮಿ

# ಶಿಲ್ಪಸಿದ್ಧಾಂತಿ ಶ್ರೀ ಸಿದ್ಧಲಿಂಗ ಸ್ವಾಮಿಗಳು

ಶಿಲ್ಪಕಲಾ ಸಾರ್ವಭೌಮರೆನಿಸಿದ್ದ ಶಿಲ್ಪಿಸಿದ್ಧಾಂತಿ ಸಿದ್ಧಲಿಂಗ ಸ್ವಾಮಿಗಳು ನನಗೆ ಗುರುಗಳಾಗಿದ್ದವರು. ಶಿಲ್ಪ, ಚಿತ್ರ ಕಲಾವಿದರಾಗಿ, ಗುರುಕುಲ, ಧಾರ್ಮಿಕ ಸಾಹಿತ್ಯ, ರಾಜರ್ಷಿಗಳಾಗಿದ್ದರಲ್ಲದೆ, ಮಹಾನ್ ಸಾಧಕ ಶಕ್ತಿಯಾಗಿದ್ದರು. ಸ್ವಾಮಿಗಳು ಜಗದ್ಗುರು ಕರಸ್ಥಳ ನಾಗಲಿಂಗ ಸ್ವಾಮಿಗಳ ಮಠದ ಪೀಠಾಧೀಶರಾಗಿ, ಮಾನವ ಜಾಗೃತಿಗೆ ಮತ್ತು ಲೋಕ ಕಲ್ಯಾಣಕ್ಕಾಗಿ ದುಡಿದವರು. ತಮ್ಮ ಕಲಾ ನೈಪುಣ್ಯತೆಯಿಂದ ಶಿಲ್ಪ ಮತ್ತು ಚಿತ್ರಕಲಾ ಕೀರ್ತಿಯನ್ನು ವಿಶ್ವವ್ಯಾಪ್ತಿಯಾಗಿಸಿ, ಲೋಕವಿಖ್ಯಾತರಾಗಿದ್ದರು.

ಮೈಸೂರಿನ ರಾಮಾನುಜ ರಸ್ತೆಯು ಶಿಲ್ಪಿಸಿದ್ಧಾಂತಿ ಸಿದ್ಧಲಿಂಗ ಸ್ವಾಮಿಗಳ ಕಾರ್ಯ ಕ್ಷೇತ್ರವಾಗಿತ್ತು ಮತ್ತು ಶಿಲ್ಪ, ಚಿತ್ರಕಲೆಯ ನೆಲೆಬೀಡಾಗಿತ್ತು. ಮೈಸೂರಿನ ಕಲಾ ರಸಿಕರಿಗೆ ಇಲ್ಲಿನ ಶೈವ ಶಿಲ್ಪ ಬ್ರಹ್ಮರ್ಷಿ ಗುರುಕುಲಂ, ಶ್ರೀ ಕಾಮಕಾಮೇಶ್ವರಿ ದೇವಾಲಯ, ಜಗದ್ಗುರು ಕರಸ್ಥಲ ನಾಗಲಿಂಗ ಸ್ವಾಮಿಗಳ ಮಠ - ಇವುಗಳೆಲ್ಲಾ ಸ್ವಾಮಿಗಳ ತಪಸ್ಸಿನ ಫಲವಾಗಿತ್ತು. ಇವರು ಪರಂಪರಾನುಗತವಾಗಿ ಬಂದ ಶಿಲ್ಪಕಲಾ ಧುರೀಣರ ವಂಶಜರು. ಇವರ ವಂಶಜರು ವಿಜಯನಗರದ ಶಿಲ್ಪಕಲಾ ಪೀಳಿಗೆಯವರು. ವಿಜಯನಗರವು ಅವಸಾನವಾದ ನಂತರ ಇವರ ಹಿರಿಯರು ಮೈಸೂರು ಜಿಲ್ಲೆಯ ಕೊಳ್ಳೆಗಾಲದಲ್ಲಿ ಬಂದು ನೆಲಸಿದ್ದರು. ಅನಂತರ ಸ್ವಾಮಿಗಳು ಮೈಸೂರನ್ನು ತಮ್ಮ ಕಾರ್ಯಕ್ಷೇತ್ರವನ್ನಾಗಿ ಮಾಡಿಕೊಂಡರು.

ಕರ್ನಾಟಕದಲ್ಲಿ ಶಿಲ್ಪಿ ಸಿದ್ಧಲಿಂಗ ಸ್ವಾಮಿಗಳು ರಚಿಸಿದ ಶಿಲ್ಪ, ಚಿತ್ರಗಳು ಅತ್ಯಂತ ಪ್ರಸಿದ್ಧವಾಗಿದ್ದರೂ, ಕಲಾಕ್ಷೇತ್ರದಲ್ಲಿ ಅವರಿಗೆ ಸಿಗಬೇಕಾದ ಮನ್ನಣೆ ಸಿಗಲಿಲ್ಲ ಎಂದೇ ನನ್ನ ಅಭಿಪ್ರಾಯ. ಇದನ್ನು ಗಮನದಲ್ಲಿಟ್ಟುಕೊಂಡು ಅವರ ಆಪ್ತರಿಂದ ಕೆಲವು ಲೇಖನಗಳನ್ನು ಬರೆಸಿ, ಪುಸ್ತಕವನ್ನು ಪ್ರಕಟಿಸಲಾಗಿದೆ.

ನಾನು ಶಿಲ್ಪಕಲಾ ಅಕಾಡೆಮಿಯ ಅಧ್ಯಕ್ಷನಾಗಿರುವ ಸಮಯದಲ್ಲಿ ಈ ಪುಸ್ತಕ ಪ್ರಕಟವಾಗಿರುವುದು ನನ್ನ ಭಾಗ್ಯವೆಂದೇ ತಿಳಿಯುವೆ. ಅಲ್ಲದೆ ವಿಶೇಷವಾಗಿ ಅವರು ರಚಿಸಿರುವ ಶಿಲ್ಪ - ಚಿತ್ರಗಳ ಚಿತ್ರ ಸಂಪುಟ ಈಗ ಪ್ರಕಟಿಸಲಾಗಿದೆ. ಈ ಶಿಲ್ಪ - ಚಿತ್ರ ಸಂಪುಟದಲ್ಲಿ ಹಲವು ಶಿಲ್ಪ ಮತ್ತು ಚಿತ್ರಗಳನ್ನು ವರ್ಣದಲ್ಲಿ ಮುದ್ರಿಸಲಾಗಿದೆ. ಶಿಲ್ಪ - ಚಿತ್ರ ಸಂಪುಟ ಪ್ರಕಟವಾಗಲು ಕಾರಣ ನಮ್ಮ ಅಕಾಡೆಮಿಯ ಸದಸ್ಯರು. ಅವರೆಲ್ಲರಿಗೂ ಮತ್ತು ಶಿಲ್ಪ - ಚಿತ್ರ ಸಂಪುಟವನ್ನು ಅಂದವಾಗಿ ಮುದ್ರಿಸಿಕೊಟ್ಟ ಲಕ್ಷ್ಮಿ ಮುದ್ರಣಾಲಯದ ಶ್ರೀ ಅಶೋಕ ಕುಮಾರ್ ಅವರಿಗೂ ವಂದನೆಗಳನ್ನು ಸಲ್ಲಿಸುವೆ. ಈ ಚಿತ್ರ ಸಂಪುಟದಲ್ಲಿ ಕೆಲವು ಚಿತ್ರಗಳನ್ನು ಬಳಸಿಕೊಳ್ಳಲು ಅನುಮತಿ ನೀಡಿದ ಕರ್ನಾಟಕ ಪ್ರಾಚ್ಯವಸ್ತು ಸಂಗ್ರಹಾಲಯ ಮತ್ತು ಶ್ರೀ ಸಿದ್ಧಲಿಂಗ ಸ್ವಾಮಿಗಳ ಮೊಮ್ಮಗ ಶ್ರೀ ಎನ್. ಶಿವಾನಂದ್ ಅವರಿಗೆ ವಂದನೆಗಳನ್ನು ಸಲ್ಲಿಸುವೆ ಅಲ್ಲದೆ ಛಾಯಾಚಿತ್ರಗಳನ್ನು ತೆಗೆದ ಶ್ರೀ ಎಲ್. ಶಿವಲಿಂಗಪ್ಪ ಮತ್ತು ಚಿತ್ರ ಸಂಪುಟದ ಸಂಪಾದಕರಾದ ಶ್ರೀ ಎನ್. ಮರಿಶಾಮಾಚಾರ್ ಅವರಿಗೂ ವಂದನೆಗಳನ್ನು ಸಲ್ಲಿಸುವೆ. ನಮ್ಮ ನಾಡಿನ ಜನರು ನಮ್ಮ ಅಕಾಡೆಮಿಯ ಈ ಸಾಧನೆಯನ್ನು ಸ್ವಾಗತಿಸುವರೆಂದು ಆಶಿಸುತ್ತೇನೆ.

೧೯೯೯, ಸೆಪ್ಟೆಂಬರ್
ಬೆಂಗಳೂರು

**ಸಿ. ಪರಮೇಶ್ವರಾಚಾರ್**
ಅಧ್ಯಕ್ಷರು
ಕರ್ನಾಟಕ ಶಿಲ್ಪಕಲಾ ಅಕಾಡೆಮಿ



ದಕ್ಷಿಣಾಮೂರ್ತಿ



ಮಹಾಲಕ್ಷ್ಮಿ

